# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1230 |
| ಉತ್ತರಿಸಬೇಕಾದ ದಿನಾಂಕ | 22.09.2021 |
| ಸದಸ್ಯರ ಹೆಸರು | ಶ್ರೀ ಕೆ. ಹರೀಶ್ ಕುಮಾರ್ |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರೈತರ ಪಹಣಿ ಪತ್ರ (ಆರ್.ಟಿ.ಸಿ)ವನ್ನು ದಾಖಲಿಸುವಾಗ ಸಿಬ್ಬಂದಿಯಿಂದ ಆಗುವ ತಪ್ಪಿನಿಂದ ರೈತರಿಗೆ ತೊಂದರೆಯಾಗಿದ್ದು, ಅದನ್ನು ಸರಿಪಡಿಸುವಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರೈತರ ಪಹಣಿ ಪತ್ರವನ್ನು (ಆರ್.ಟಿ.ಸಿ) ದಾಖಲಿಸುವಾಗ ಸಿಬ್ಬಂದಿಯಿಂದ ಆಗುವ ತಪ್ಪಿನಿಂದ ರೈತರಿಗೆ ತೊಂದರೆಯಾಗುತ್ತಿರುವ ಕೆಲವು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಬಂದಿದ್ದಲ್ಲಿ ಸರಿಪಡಿಸಲು ಕಾಲಮಿತಿಯನ್ನು ವಿಧಿಸುವ ಮತ್ತು ವ್ಯವಸ್ಥೆಯನ್ನು ಸರಳೀಕೃತಗೊಳಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? (ಮಾಹಿತಿಯನ್ನು ಒದಗಿಸುವುದು) | ಸದರಿ ತಪ್ಪುಗಳನ್ನು ಸರಿಪಡಿಸುವಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಲು ಹಾಗೂ ಕೈಬರಹದ ಪಹಣಿಯನ್ನು ಗಣಕೀಕರಣಗೊಳಿಸುವಲ್ಲಿ ಆಗಿರುವ ತಪ್ಪುಗಳನ್ನು ಸರಿಪಡಿಸಲು ಸರ್ಕಾರದ ಆದೇಶ ಸಂಖ್ಯೆ: ಕಂಇ/65/ಎಂಆರ್‌ಆರ್/2020, ದಿನಾಂಕ:09.03.2021ರಂತೆ ಸಂಬಂಧಿಸಿದ ತಾಲ್ಲೂಕು ತಹಶೀಲ್ದಾರರ ಹಂತದಲ್ಲಿ ಕಂದಾಯ ಆದಾಲತ್ ಸೌಲಭ್ಯವನ್ನು ಕಲ್ಪಿಸಲಾಗಿದೆ.<br><br>ಪ್ರಸ್ತುತ ರಾಜ್ಯದೆಲ್ಲೆಡೆ ಕಂದಾಯ ಆದಾಲತ್ ಸೌಲಭ್ಯವು ದಿನಾಂಕ:31.12.2021ರವರೆಗೆ ಜಾರಿಯಲ್ಲಿರುತ್ತದೆ (ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಉಡುಪಿ, ದಕ್ಷಿಣ ಕನ್ನಡ ಜಿಲ್ಲೆಗಳನ್ನು ಹೊರತುಪಡಿಸಿ). ಮುಂದುವರೆದು, ಪಹಣಿಯಲ್ಲಿನ ತಪ್ಪುಗಳನ್ನು ಸರಿಪಡಿಸಲು ಸಂಬಂಧಿಸಿದ ಉಪವಿಭಾಗಾಧಿಕಾರಿಗಳ ಹಂತದಲ್ಲಿ ಆರ್.ಟಿ.ಸಿ. ಮ್ಯಾನೇಜ್‌ಮೆಂಟ್ ತಂತ್ರಾಂಶದ ಸೌಲಭ್ಯ ಕಲ್ಪಿಸಲಾಗಿದೆ. ಸದರಿ ತಂತ್ರಾಂಶದಲ್ಲಿ ಉಪವಿಭಾಗಾಧಿಕಾರಿಗಳ ಅನುಮೋದನೆಯ ನಂತರ ಕಡತವು ನೇರವಾಗಿ ಸಂಬಂಧಿಸಿದ ತಾಲ್ಲೂಕು ಕಛೇರಿಯ ಕಂದಾಯ ನಿರೀಕ್ಷಕರ ಲಾಗಿನ್‌ಗೆ ವರ್ಗಾಯಿಸಲ್ಪಡುವುದರಿಂದ ತ್ವರಿತವಾಗಿ ತಿದ್ದುಪಡಿ ಮಾಡಬಹುದಾಗಿರುತ್ತದೆ. |

ಕಂಇ 169 ಎಂಆರ್‌ಆರ್ 2021

(ಆರ್. ಅಶೋಕ)
ಕಂದಾಯ ಸಚಿವರು